## ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 333 |
| ಸದಸ್ಯರ ಹೆಸರು | ಶ್ರೀಮತಿ ಎಸ್. ವೀಣಾ ಅಚ್ಚಯ್ಯ (ವಿಧಾನಸಭೆಯಿಂದ ಚುನಾಯಿತರಾದವರು) |
| ಉತ್ತರಿಸುವ ದಿನಾಂಕ | 18.02.2022 |
| ಉತ್ತರಿಸುವ ಸಚಿವರು | ಕೃಷಿ ಸಚಿವರು |

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಕೊಡಗು ಜಿಲ್ಲೆಯಲ್ಲಿ ಭತ್ತ ಬೆಳೆಯುತ್ತಿದ್ದ ಬಹುತೇಕ ಭತ್ತದ ಕೃಷಿ ಜಮೀನಿನಲ್ಲಿ, ರೈತರು ಭತ್ತ ಬೆಳೆಯದೇ ಪಾಳು ಬಿಟ್ಟಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಹೌದು.<br>ಕೊಡಗು ಜಿಲ್ಲೆಯಲ್ಲಿ ಭತ್ತವು ಪ್ರಮುಖ ಮುಂಗಾರು ಹಂಗಾಮಿನ ಬೆಳೆಯಾಗಿರುತ್ತದೆ.ಭತ್ತದ ಕೃಷಿಯಿಂದ ನಿರೀಕ್ಷಿತ ಆದಾಯ ಇಲ್ಲದಿರುವುದು, ಕೃಷಿ ಕಾರ್ಮಿಕರ ಕೊರತೆ, ಕಾಡು ಪ್ರಾಣಿಗಳ ಹಾವಳಿ ಹಾಗೂ ಗುಡ್ಡಗಾಡು ಪ್ರದೇಶದಲ್ಲಿ ಕೃಷಿ ಯಂತ್ರೋಪಕರಣಗಳ ಬಳಕೆ ಕಷ್ಟವಾಗುತ್ತಿರುವುದು ಕಂಡುಬಂದಿರುತ್ತದೆ |
| ಆ) | ಬಂದಿದ್ದಲ್ಲಿ, ಜಿಲ್ಲೆಯಲ್ಲಿ ಈ ಹಿಂದೆ ಭತ್ತ ಬೆಳೆಯುತ್ತಿದ್ದ ಬಹುತೇಕ ಭತ್ತದ ಕೃಷಿ ಜಮೀನನ್ನು ಪಾಳು ಬಿಡಲು ಕಾರಣವಾದ ಅಂಶಗಳನ್ನು ಸರ್ಕಾರ ಗುರುತಿಸಿದೆಯೇ; | |
| ಇ) | ಕಾರಣಗಳನ್ನು ಗುರುತಿಸಿದಲ್ಲಿ, ಜಿಲ್ಲೆಯಲ್ಲಿ ಭತ್ತದ ಕೃಷಿಯನ್ನು ಪ್ರೋತ್ಸಾಹಿಸಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು; | ಕೃಷಿ ಇಲಾಖೆಯಿಂದ ಅನುಷ್ಠಾಗೊಳಿಸಲಾಗುತ್ತಿರುವ ಆತ್ಮ ಯೋಜನೆ, ಕೃಷಿ ವಿಸ್ತೀರ್ಣ ಮತ್ತು ತರಬೇತಿ ಕಾರ್ಯಕ್ರಮಗಳಡಿಯಲ್ಲಿ ಭತ್ತ ಬೆಳೆಯನ್ನು ಪ್ರೋತ್ಸಾಹಿಸುವ ಸಲುವಾಗಿ ರೈತರಿಗೆ ಹೆಚ್ಚು ಹೆಚ್ಚಾಗಿ ತರಬೇತಿ, ಕಾರ್ಯಾಗಾರ, ಪ್ರಾತ್ಯಕ್ಷಿಕೆಗಳು ಮತ್ತು ಅಭಿಯಾನಗಳನ್ನು ಹಮ್ಮಿಕೊಳ್ಳಲಾಗಿರುತ್ತದೆ. ರೈತರಿಗೆ ಸಹಾಯಧನದಡಿಯಲ್ಲಿ ಕೃಷಿ ಪರಿಕರಗಳಾದ ಬಿತ್ತನೆ ಬೀಜ, ಸಸ್ಯ ಸಂರಕ್ಷಣಾ ಔಷಧಿಗಳು, ಸಸ್ಯ ಸಂರಕ್ಷಣಾ ಉಪಕರಣಗಳು , ಕೃಷಿ ಯಾಂತ್ರೀಕರಣ ಯೋಜನೆಯಡಿ ಭತ್ತ ಬೆಳೆ ಉತ್ತೇಜನಕ್ಕಾಗಿ ರೈತರಿಗೆ ಸಹಾಯಧನದಲ್ಲಿ ಪವರ್ ಟಿಲ್ಲರ್, ರೋಟೋವೇಟರ್, ಡೀಸೆಲ್ ಪಂಪ್ ಸೆಟ್, ರೀಪರ್, ಸಣ್ಣ ಟ್ರಾಕ್ಟರ್ ಮತ್ತು ಟಾರ್ಪಾಲಿನ್ ಗಳನ್ನು ವಿತರಣೆ ಮಾಡಲಾಗುತ್ತಿದೆ. ಹಾಗೂ ಕೃಷಿ ಯಂತ್ರಧಾರೆ ಯೋಜನೆಯಡಿ ಹೋಬಳಿವಾರು ಕೃಷಿ ಯಂತ್ರೋಪಕರಣಗಳ ಬಾಡಿಗೆ ಕೇಂದ್ರಗಳ ಮೂಲಕ ರೈತರಿಗೆ ಕಡಿಮೆ ದರದಲ್ಲಿ ಕೃಷಿ ಯಂತ್ರೋಪಕರಣಗಳನ್ನು ಬಾಡಿಗೆ ಆಧಾರದಲ್ಲಿ ನೀಡಲಾಗುತ್ತಿದೆ |

| | | |
|---|---|---|
| ಈ) | ಜಿಲ್ಲೆಯಲ್ಲಿ ಭತ್ತದ ಕೃಷಿ ಪ್ರೋತ್ಸಾಹಿಸಲು ರೈತರಿಗೆ ವಿಶೇಷ ಪ್ಯಾಕೇಜ್ ಘೋಷಿಸಲು ಸರ್ಕಾರ ಮುಂದಾಗುವುದೇ? | ಭತ್ತದ ಕೃಷಿ ಪ್ರೋತ್ಸಾಹಿಸಲು ರೈತರಿಗೆ ವಿಶೇಷ ಪ್ಯಾಕೇಜ್ ಘೋಷಿಸುವ ಕುರಿತು ಯಾವುದೇ ಪ್ರಸ್ತಾವನೆ ಸರ್ಕಾರದ ಮುಂದೆ ಇರುವುದಿಲ್ಲ. |

**ಸಂಖ್ಯೆ: AGRI-ACT/25/2022**

(ಬಿ.ಸಿ. ಪಾಟೀಲ್)
ಕೃಷಿ ಸಚಿವರು